# ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

# ವಾರ್ಷಿಕ ವರದಿ ೧೯೮೮-೮೯

ಅಕಾದೆಮಿಯು ೧೯೮೮-೮೯ನೇ ಸಾಲಿನಲ್ಲಿ ೧೯೮೯ನೇ ಮಾರ್ಚ್ ೩೧ರ ವರೆಗೆ ನಡೆಸಿದ ವಿವಿಧ ಕಾರ್ಯಕ್ರಮಗಳ ವರದಿ ಇಂತಿದೆ :

ವಿಚಾರಗೋಷ್ಠಿ : ೧೨-೨-೧೯೮೮ನೇ ಶುಕ್ರವಾರದಂದು ಅಕಾದೆಮಿಯು ವಿಜಾಪುರ ಆದಿಲ್‌ಶಾಹಿಗಳ ಕುರಿತು ಬೆಂಗಳೂರಿನ ಸೆನೆಟ್‌ಹಾಲ್‌ನಲ್ಲಿ ವಿಚಾರ ಗೋಷ್ಠಿಯನ್ನು ನಡೆಸಿತು. ಐ.ಸಿ.ಎಚ್.ಆರ್.ನ ಮಾಜಿ ಅಧ್ಯಕ್ಷರಾದ ಪ್ರೊ॥ ಎ.ಆರ್. ಕುಲಕರ್ಣಿ ಅವರು ಗೋಷ್ಠಿಯನ್ನು ಉದ್ಘಾಟಿಸಿದರು. ಭಾರತ ಸರ್ಕಾರದ ಮಾಜಿ ಡೈರೆಕ್ಟರ್ ಆಫ್ ಎಪಿಗ್ರಾಫಿ ಆದ ಡಾ॥ ಜಿಯಾದ್ದಿನ್ ದೇಸಾಯಿ ಅವರು ಮುಖ್ಯ ಭಾಷಣವನ್ನು ಮಾಡಿದರು. ೩೪ಕ್ಕೂ ಮೇಲ್ಪಟ್ಟು ಪ್ರಬಂಧಗಳು ಗೋಷ್ಠಿಯಲ್ಲಿ ಮಂಡಿತವಾದುವು.

ಉಪನ್ಯಾಸ ಕಾರ್ಯಕ್ರಮಗಳು : ಮಿಥಿಕ್ ಸೊಸೈಟಿಯ ಸಹಕಾರದೊಂದಿಗೆ ಅಕಾದೆಮಿಯು ದಿನಾಂಕ ೨೦-೫-೮೮ರ ಶುಕ್ರವಾರ ಸಂಜೆ ಕಾರ್ಯಕ್ರಮ ಏರ್ಪಡಿಸಿತ್ತು. ಉಪನ್ಯಾಸಕರು : ಶ್ರೀ ಫಜ್‌ಲುಲ್ ಹಸನ್, ವಿಷಯ : ಕೊಡಗಿನ ಇತಿಹಾಸದ ಮೇಲೆ ಹೊಸಬೆಳಕು, ಸ್ಥಳ : ಮಿಥಿಕ್ ಸೊಸೈಟಿ, ಅಧ್ಯಕ್ಷರು : ಡಾ॥ ಜಿ. ಎಸ್. ದೀಕ್ಷಿತ್ : ದಿನಾಂಕ ೧೬-೬-೮೮ರ ಗುರುವಾರ ಸಂಜೆ ೬ ಗಂಟೆಗೆ ಉಪನ್ಯಾಸ ಕಾರ್ಯಕ್ರಮ. ಉಪನ್ಯಾಸಕರು : ಶ್ರೀ ಸೇತುಮಾಧವರಾವ್ ಪಗಡಿ, ವಿಷಯ : 'ಕೆಳದಿನೃಪವಿಜಯಂ ಕೃತಿಯ ಚಾರಿತ್ರಿಕ ಮಹತ್ವ', ಅಧ್ಯಕ್ಷರು : ಡಾ॥ ಸೂರ್ಯನಾಥ ಕಾಮತ್ ; ಮಿಥಿಕ್ ಸೊಸೈಟಿಯ ಸಹಕಾರದೊಂದಿಗೆ ದಿನಾಂಕ ೬-೧-೧೯೮೯ನೇ ಶುಕ್ರವಾರ ಸಂಜೆ ೬ ಗಂಟೆಗೆ ಕಾರ್ಯಕ್ರಮ. ಉಪನಾಸ್ಯಕರು : ಡಾ॥ ಎಂ. ಚಿದಾನಂದಮೂರ್ತಿ, ವಿಷಯ : ಹಂಪೆಯ ಬಗ್ಗೆ ಹೊಸ ಶೋಧಗಳು, ಅಧ್ಯಕ್ಷರು : ಡಾ॥ ಜಿ. ಎಸ್. ದೀಕ್ಷಿತ್.

ದ್ವಿತೀಯ ವಾರ್ಷಿಕ ಸಮ್ಮೇಳನ : ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತಿನ ಸಹಕಾರದೊಡನೆ ೧೯೮೮ ಅಕ್ಟೋಬರ್ ೨೩ ಮತ್ತು ೨೪ ರಂದು ತುಮಕೂರಿನ ವಿದ್ಯೋದಯ ಕಾನೂನು ಕಾಲೇಜಿನಲ್ಲಿ ಅಕಾದೆಮಿಯ ದ್ವಿತೀಯ ವಾರ್ಷಿಕ ಸಮ್ಮೇಳನವು ನಡೆಯಿತು.

ದಿನಾಂಕ ೨೩-೧೦-೧೯೮೮ನೇ ಭಾನುವಾರ ಬೆಳಿಗ್ಗೆ ೯ ಗಂಟೆಗೆ ಸಿದ್ಧಗಂಗಾ ಮಠಾಧೀಶರಾದ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಸಮ್ಮೇಳನದ ಉದ್ಘಾಟನೆಯನ್ನು ನೆರವೇರಿಸಿದರು. ಕರ್ನಾಟಕ ಸರ್ಕಾರದ ಆರ್ಥಿಕ ಸಲಹೆಗಾರರಾದ ಡಾ॥ ಜಿ. ತಿಮ್ಮಯ್ಯ ಅವರು ಮುಖ್ಯ ಅತಿಥಿಗಳಾಗಿ ಉಪನ್ಯಾಸ ನೀಡಿದರು.

ಅಕಾದೆಮಿಯ ಮೊದಲ ಸಮ್ಮೇಳನಾಧ್ಯಕ್ಷ ಡಾ॥ ಎಂ. ಚಿದಾನಂದಮೂರ್ತಿ ಅವರು ಡಾ॥ ಸೀದಗಿ ರಾಜಶೇಖರ ಅವರ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' ಎಂಬ ಕೃತಿಯನ್ನು ಬಿಡುಗಡೆ ಮಾಡಿದರು. ಸಮ್ಮೇಳನಾಧ್ಯಕ್ಷ ಡಾ॥ ಜಿ. ಎಸ್. ಗಾಯಿ ಅವರು ಅಧ್ಯಕ್ಷ ಭಾಷಣ ಮಾಡಿದರು.

ಅದೇ ದಿನ ಬೆಳಿಗ್ಗೆ ೧೧-೪೫ಕ್ಕೆ ಪ್ರೊ॥ ಮಾಧವ ನಾ. ಕಟ್ಟಿ ಅವರ ಅಧ್ಯಕ್ಷತೆಯಲ್ಲಿ ಮೊದಲ ಗೋಷ್ಠಿಯು ನಡೆದು ಏಳುಜನ ವಿದ್ವಾಂಸರು ತಮ್ಮ ಪ್ರಬಂಧಗಳನ್ನು ಮಂಡಿಸಿದರು. ಮಧ್ಯಾಹ್ನ ೨.೧೫ ರಿಂದ ಎರಡನೇ ಗೋಷ್ಠಿಯು ಡಾ॥ ಅ. ಸುಂದರ ಅವರ ಅಧ್ಯಕ್ಷತೆಯಲ್ಲಿ ನಡೆದು ಎಂಟುಜನ ವಿದ್ವಾಂಸರು ತಮ್ಮ ಪ್ರಬಂಧಗಳನ್ನು ಮಂಡಿಸಿದರು. ನಂತರ ಮೂರನೆಯ ಗೋಷ್ಠಿಯು ನಡೆದು ಒಂಭತ್ತುಜನ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದರು. ಶ್ರೀ ಕೆ. ಅಭಿಶಂಕರ್ ಈ ಗೋಷ್ಠಿಯ ಅಧ್ಯಕ್ಷರಾಗಿದ್ದರು. ಆ ದಿನ ಸಂಜೆ ಸರ್ವಸದಸ್ಯರ ವಾರ್ಷಿಕ ಸಭೆಯು ಅಕಾದೆಮಿಯ ಉಪಾಧ್ಯಕ್ಷ ಶ್ರೀ ಎಂ. ಜಿ. ನಾಗರಾಜ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು ಹಾಗೂ ಮುಂದಿನ ಅವಧಿಗೆ ನೂತನ ಕಾರ್ಯಕಾರಿ ಸಮಿತಿಯ ಸದಸ್ಯರನ್ನು ಚುನಾಯಿಸಲಾಯಿತು. ಪ್ರಧಾನ ಕಾರ್ಯದರ್ಶಿ ಶ್ರೀ ಲಕ್ಷ್ಮಣ್ ತೆಲಗಾವಿ ಅವರು ಹೊಸ ಕಾರ್ಯಕಾರಿ ಸಮಿತಿಯ ಪದಾಧಿಕಾರಿಗಳನ್ನು ಪ್ರಕಟಿಸಿದರು.

ದಿನಾಂಕ ೨೪-೧೦-೧೯೮೮ ರಂದು ಬೆಳಿಗ್ಗೆ ೯ ಗಂಟೆಗೆ ನಾಲ್ಕನೇ ಗೋಷ್ಠಿಯು ಆರಂಭವಾಗಿ, ಏಳುಜನ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದರು. ಡಾ॥ ಕೆ. ಎನ್. ಚಿಟ್ನೀಸ್ ಅವರು ಗೋಷ್ಠಿಯ ಅಧ್ಯಕ್ಷರಾಗಿದ್ದರು. ಐದನೇ ಗೋಷ್ಠಿಯು ಡಾ॥ ಎಚ್. ಆರ್. ರಘುನಾಥ ಭಟ್ ಅವರ ಅಧ್ಯಕ್ಷತೆಯಲ್ಲಿ ಬೆಳಿಗ್ಗೆ ೧೧-೩೦ಕ್ಕೆ ಆರಂಭವಾಗಿ, ಏಳುಜನ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದರು. ಆರನೇ ಗೋಷ್ಠಿಯು ಮಧ್ಯಾಹ್ನ ೨-೩೦ಕ್ಕೆ ಡಾ॥ ಪರ್ವಿನ್ ರುಕ್ಸಾನಾ ಅವರ ಅಧ್ಯಕ್ಷತೆಯಲ್ಲಿ ಆರಂಭವಾಯಿತು. ಆರುಜನ ವಿದ್ವಾಂಸರು ಗೋಷ್ಠಿಯಲ್ಲಿ ಪ್ರಬಂಧ ಮಂಡಿಸಿದರು.

ಸಮ್ಮೇಳನದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಆರ್. ಎಸ್. ಆರಾಧ್ಯರು ವಹಿಸಿದ್ದರು. ಪ್ರತಿನಿಧಿಗಳ ಪರವಾಗಿ ಡಾ॥ ಎಚ್. ಆರ್. ರಘುನಾಥ ಭಟ್, ಡಾ॥ ರಜಾಕ್ ಫರೂಕಿ ಮಾತನಾಡಿದರು. ಶ್ರೀ ಟಿ. ಕೆ. ನಂಜುಂಡಪ್ಪ ಅವರು ಸಮ್ಮೇಳನದ ಸಂಘಟನೆಯ ಬಗ್ಗೆ ತಿಳಿಸಿದರು. ಡಾ॥ ಸೂರ್ಯನಾಥ ಕಾಮತ್ ಅವರು ಸಮ್ಮೇಳನದ ಯಶಸ್ಸಿಗಾಗಿ ದುಡಿದ ಸಮ್ಮೇಳನದ ಸಂಘಟಕರಿಗೆ ವಂದನೆಗಳನ್ನು ಅರ್ಪಿಸಿದರು. ಶ್ರೀ ಎಚ್. ರೇವಣಸಿದ್ದಪ್ಪ ಅವರು ಸಮ್ಮೇಳನದ ಯಶಸ್ಸಿಗಾಗಿ ದುಡಿದ ವ್ಯಕ್ತಿ ಹಾಗೂ ಸಂಸ್ಥೆಗಳಿಗೂ ಸರ್ವರಿಗೂ ಕೃತಜ್ಞತೆಗಳನ್ನು ಸಲ್ಲಿಸಿದರು.

ಈ ಸಮ್ಮೇಳನದಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ೪೪ ಮಂದಿ ಹಿರಿಯ ಹಾಗೂ ಯುವ ವಿದ್ವಾಂಸರು ಭಾಗವಹಿಸಿ, ಚರಿತ್ರೆ, ಶಾಸನ, ಸಂಶೋಧನೆ ಕುರಿತಂತೆ ವಿದ್ವತ್‌ಪೂರ್ಣ ಪ್ರಬಂಧಗಳನ್ನು ಮಂಡಿಸಿದರು.

**ಇತಿಹಾಸ ಪರೀಕ್ಷೆ :** ದ್ವಿತೀಯ ಪದವಿಪೂರ್ವ ತರಗತಿಯ ವಿದ್ಯಾರ್ಥಿಗಳಿಗೆ ಇತಿಹಾಸ ಪರೀಕ್ಷೆಯನ್ನು ಬೆಂಗಳೂರು ಹಾಗೂ ಧಾರವಾಡ ಕೇಂದ್ರಗಳಲ್ಲಿ ಯಶಸ್ವಿಯಾಗಿ ನಡೆಸಲಾಯಿತು. ಒಟ್ಟು ೨೫೯೦ ವಿದ್ಯಾರ್ಥಿಗಳು ಪರೀಕ್ಷೆ ತೆಗೆದುಕೊಂಡಿದ್ದರು (ಬೆಂಗಳೂರು ೧೫೮೦, ಧಾರವಾಡ ೧೦೧೦). ಒಟ್ಟು ಆರು ಬಹುಮಾನಗಳನ್ನು (೩+೩ ವಿಶೇಷ) ನೀಡಲಾಯಿತು. ಅಂಧ ವಿದ್ಯಾರ್ಥಿಗೆ ಪ್ರೋತ್ಸಾಹಕ ಬಹುಮಾನವನ್ನು ನೀಡಲಾಯಿತು. ಶ್ರೀ ಕೆ. ಜಿ. ನಾಗರಾಜನ್ ಅವರು ಸದರಿ ಪರೀಕ್ಷೆಯ ಸಂಚಾಲಕರಾಗಿದ್ದರು.

**ಕಾರ್ಯಕಾರಿ ಸಮಿತಿ ಸಭೆಗಳು :** ೧೯೮೮ ರಿಂದ ೧೯೮೯ನೇ ಮಾರ್ಚ್ ೩೧ರ ವರೆಗೆ ಒಟ್ಟು ೯ ಬಾರಿ ಕಾರ್ಯಕಾರಿ ಸಮಿತಿ ಸಭೆಗಳು ಬೆಂಗಳೂರಿನಲ್ಲಿ ಸೇರಿದ್ದು, ಅಕಾದೆಮಿಯ ವಿವಿಧ ಕಾರ್ಯಕ್ರಮಗಳನ್ನು ಕೈಗೊಳ್ಳಲು ನೆರವಾಗಿವೆ. ಸರ್ವಶ್ರೀ ಎ. ಎಸ್. ಜಾಗೀರ್‌ದಾರ್ (ಬಿಜಾಪುರ), ಕೆ. ಜಗನ್ನಾಥಶಾಸ್ತ್ರಿ (ಶಿವಮೊಗ್ಗ) ಮತ್ತು ಎಲ್. ಆರ್. ಕುಲಕರ್ಣಿ (ಬೀದರ್) ಅವರುಗಳನ್ನು ಕಾರ್ಯಕಾರಿ ಸಮಿತಿಗೆ ಸರ್ವಸಮ್ಮತಿಯೊಡನೆ ನಾಮಕರಣ ಮಾಡಲಾಗಿದೆ.

**ಸದಸ್ಯರ ಸಂಖ್ಯೆ :** ಈ ವಾರ್ಷಿಕ ಸಭೆಯ ಹೊತ್ತಿಗೆ ಅಕಾದೆಮಿಯ ಸದಸ್ಯತ್ವದ ವಿವರ ಹೀಗಿದೆ :

ಆಜೀವ ಸದಸ್ಯರು : ೧೧೩ (ನೂರಾ ಹದಿಮೂರು) ಮತ್ತು ಸಾಮಾನ್ಯ ಸದಸ್ಯರು : ೨೦೯ (ಇನ್ನೂರಾ ಒಂಬತ್ತು) ; (೧೯೮೬-೮೭ : ೧೩೧, ೧೯೮೭-೮೮ : ೧೧+೧೩೧, ೧೯೮೮-೮೯ : ೬೭+೧೪೨=೨೦೯).

ಕೃತಜ್ಞತೆ : ೧೯೮೮-೮೯ನೇ ಸಾಲಿನಲ್ಲಿ ಅಕಾದೆಮಿಯ ಕಾರ್ಯಕ್ರಮಗಳಿಗೆ ಸೂಕ್ತ ಸಲಹೆ, ಸಹಾಯ, ಸಹಕಾರಗಳನ್ನು ನೀಡಿ ನೆರವಾದ ದೆಹಲಿಯ ಭಾರತೀಯ ಇತಿಹಾಸ ಸಂಶೋಧನಾ ಮಂಡಲಿ (ಐ.ಸಿ.ಎಚ್.ಆರ್.), ಬೆಂಗಳೂರಿನ ಮಿಥಿಕ್ ಸೊಸೈಟಿ, ಅಲ್‌ಅಮೀನ್ ಶಿಕ್ಷಣ ಸಂಸ್ಥೆ, ಕರ್ನಾಟಕ ಪದವಿಪೂರ್ವ ಶಿಕ್ಷಣ ಮಂಡಳಿ, ಆಚಾರ್ಯ ಪಾಠಶಾಲಾ ಕಾಲೇಜು, ಧಾರವಾಡದ ಕರ್ನಾಟಕ ಕಲಾ ವಿಜ್ಞಾನ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯದ ಬಿ.ಎಡ್. ಕಾಲೇಜು, ತುಮಕೂರಿನ ಜಿಲ್ಲಾ ಇತಿಹಾಸ ಪರಿಷತ್ ಹಾಗೂ ಇನ್ನಿತರ ಸಂಸ್ಥೆಗಳು ಮತ್ತು ಮಹನೀಯರಿಗೆ ಅಕಾದೆಮಿಯು ಆಭಾರಿಯಾಗಿದೆ. ತುಮಕೂರು ಸಮ್ಮೇಳನದ ಯಶಸ್ಸಿಗೆ ನೆರವಾದ ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀ ಆರ್. ಎಸ್. ಆರಾಧ್ಯ, ಪ್ರೊ॥ ಜಿ. ಎಮ್. ಶ್ರೀನಿವಾಸಯ್ಯ, ವಿದ್ಯೋದಯ ಕಾನೂನು ಕಾಲೇಜಿನ ಪ್ರಿನ್ಸಿಪಾಲ್ ಪ್ರೊ॥ ಶೇಷಾದ್ರಿ ಹಾಗೂ ಆರ್ಯನ್ ಪ್ರೌಢಶಾಲೆಯ ಶ್ರೀ ಜಗದೀಶ್ ಮತ್ತು ದಾನನೀಡಿದ ಬೆಂಗಳೂರು ರೋಟರಿ ಕ್ಲಬ್‌ನ ಡಾ॥ ಎಂ. ಗೋಪಾಲಕೃಷ್ಣ ಅವರುಗಳಿಗೆ ಹಾಗೂ ಇತರ ಎಲ್ಲರಿಗೆ ಅಕಾದೆಮಿಯು ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.